

# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ರಹಿತ ಪ್ರಶ್ನೆ

ದಿನಾಂಕ : 31-03-2021 ಪ್ರಶ್ನೆ ಸಂಖ್ಯೆ : 3033 (2466)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಹೆಚ್.ಎಂ.ರಮೇಶಗೌಡ (ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರ ನೀಡಬೇಕಾದ ದಿನಾಂಕ : 31-03-2021

ಉತ್ತರಿಸುವ ಸಚಿವರು: ಉಪ ಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ ಸಚಿವರು

ವಿಷಯ : ರಾಜ್ಯದಲ್ಲಿರುವ ರಾಷ್ಟ್ರೀಯ ಹೆದ್ದಾರಿಗಳ ಟೋಲ್ ಪ್ಲಾಜಗಳ ಕುರಿತು

(ಅ) ರಾಜ್ಯದಲ್ಲಿರುವ ರಾಷ್ಟ್ರೀಯ ಹೆದ್ದಾರಿಗಳಲ್ಲಿರುವ ಟೋಲ್ ಪ್ಲಾಜಗಳ ಸಂಖ್ಯೆ ಎಷ್ಟು; ಅವು ಯಾವುವು; ನಿರ್ಮಾಣವಾದ ವರ್ಷ ಯಾವುದು; ಈ ಟೋಲ್‌ಗಳ ಟೆಂಡರ್‌ದಾರರು ಯಾರು; ಟೆಂಡರ್ ಅವಧಿ ಎಷ್ಟು ; (ಟೆಂಡರ್‌ದಾರರೊಂದಿಗೆ ಸರ್ಕಾರ ಮಾಡಿಕೊಂಡಿರುವ ಒಪ್ಪಂದದ ಪತ್ರದೊಂದಿಗೆ ವಿವರ ನೀಡುವುದು)

(ಆ) ಕಳೆದ ಐದು ವರ್ಷಗಳಲ್ಲಿ ಈ ಟೋಲ್‌ಗಳಲ್ಲಿ ಸಂಗ್ರಹವಾದ ಹಣವೆಷ್ಟು; ಇದರಲ್ಲಿ ಸರ್ಕಾರಕ್ಕೆ ಮತ್ತು ಟೆಂಡರ್‌ದಾರರಿಗೆ ಬಂದ ವರಮಾನವೆಷ್ಟು; ಕಳೆದ ಐದು ವರ್ಷಗಳಲ್ಲಿ ಇವುಗಳ ನಿರ್ವಹಣೆಗಾಗಿ ವೆಚ್ಚ ಮಾಡಲಾದ ಹಣ ಎಷ್ಟು ; (ಸೇವಾವಾರು ಮತ್ತು ಟೋಲ್‌ವಾರು ವಿವರ ನೀಡುವುದು)

(ಇ) ಸರ್ಕಾರದ ನಿಯಮಗಳಂತೆ ಈ ಟೋಲ್‌ಗಳಲ್ಲಿ ಪ್ರಯಾಣಿಕರಿಗೆ ಒದಗಿಸಬೇಕಾದ ಸೇವೆ/ಸೌಲಭ್ಯಗಳೇನು; ಈ ಸೇವೆಗಳಿಗಾಗಿ ಖರ್ಚಾಗಿರುವ ವೆಚ್ಚವೆಷ್ಟು ; (ಆದೇಶಗಳ ಸಹಿತ ವಿವರವಾದ ಮಾಹಿತಿ ನೀಡುವುದು)

(ಈ) ಈ ಟೋಲ್‌ಗಳಲ್ಲಿ ಪ್ರಯಾಣಿಕರು ಕಾಯಲು ಸರ್ಕಾರ ನಿಗದಿಪಡಿಸಿರುವ ಕಾಲಮಿತಿಯೆಷ್ಟು; ಈ ಕಾಲಮಿತಿ ದಾಟಿದ ನಂತರ ಟೋಲ್ ವಸೂಲಿ ಮಾಡಲು ಅವಕಾಶವಿದೆಯೇ; ಫಾಸ್ಟ್ ಟ್ಯಾಗ್ ಸೆನ್ಸಾರ್‌ಗಳು ಸರಿಯಾಗಿ ಕೆಲಸ ಮಾಡದಿರುವುದರಿಂದ ಪ್ರಯಾಣಿಕರಿಗೆ ಆಗುತ್ತಿರುವ ತೊಂದರೆಯನ್ನು ತಡೆಗಟ್ಟಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು ;

(ಉ) ಅಂಬುಲೆನ್ಸ್ ಹಾಗೂ ಶಾಸಕರ ವಾಹನಗಳ ಸಂಚಾರಕ್ಕೆ ಪ್ರತ್ಯೇಕ ಲೇನ್ ಬಿಡದಿರುವುದು ಮತ್ತು ಅಧಿಕೃತ ಪಾಸ್ ಇದ್ದರೂ ಕೂಡ ಫಾಸ್ಟ್ ಟ್ಯಾಗ್ ಇಲ್ಲವೆಂಬ ಒಂದೇ ಕಾರಣಕ್ಕೆ ಟೋಲ್‌ಗಳಲ್ಲಿ ಶಾಸಕರ (ವಿ.ಐ.ಪಿ) ವಾಹನಗಳನ್ನು ಬಿಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಸಂಬಂಧ ಸರ್ಕಾರ ಕೈಗೊಂಡಿರುವ ಕ್ರಮಗಳೇನು